**(10) ಕಾರ್ಮಿಕ ಇಲಾಖೆಗೆ ಆಯವ್ಯಯದ ಹಂಚಿಕೆ** :– ಇಲಾಖೆಯ ಪ್ರತಿಯೊಂದು ಯೋಜನೆಗಳಿಗೆ ಆಯವ್ಯಯ (ಅನುದಾನ) ಹಂಚಿಕೆಯನ್ನು ವಾರ್ಷಿಕ ಯೋಜನೆಯಲ್ಲಿ ಸೂಚಿಸಿದೆ. ಈ ಹಂಚಿಕೆಯು 12 ತಿಂಗಳ ಅವಧಿಗೆ ಮಾಡಿರುವುದಾಗಿದೆ. ಇದನ್ನು ರಾಜ್ಯ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು ಮಾಸಿಕ ಪರಾಮರ್ಶನೆ ಸಭೆಯಲ್ಲಿ ಮಾಹೆಯಾನ ಪರಾಮರ್ಶಿಸಲಾಗುತ್ತದೆ. ಮಾಸಿಕ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಯಲ್ಲಿ ಪ್ರತಿಯೊಂದು ಇಲಾಖೆಯ ಹಣಕಾಸಿನ ಮತ್ತು ಭೌತಿಕ ಕಾರ್ಯಕ್ರಮಗಳನ್ನು ಹಾಗೂ ಈ ದಿಶೆಯಲ್ಲಿ ಸಾಧಿಸಿದ ಪ್ರಗತಿಯನ್ನು ಮುಖ್ಯ ಕಾರ್ಯದರ್ಶಿಗಳಿಂದ ಪರಾಮರ್ಶಿಸಲಾಗುತ್ತದೆ.

**(11) ಸಹಾಯಧನ ಕಾರ್ಯಕ್ರಮ ಮತ್ತು ಫಲಾನುಭವಿಗಳ ವಿವರ** :– ಕಾರ್ಮಿಕ ಇಲಾಖೆಯ ಯಾವುದೇ ನೇರವಾದ ಸಹಾಯಧನ ಕಾರ್ಯಕ್ರಮವನ್ನು ಹೊಂದಿರುವುದಿಲ್ಲ,. ಆದರೆ, ಇಲಾಖೆಯ ಯೋಜನೆಯ ಮೇಲೆ ವಿನಿಯೋಗಿಸಿದ ಭಾರೀ ಮೊತ್ತಕ್ಕೆ ಹೋಲಿಸಿದಾಗ ಸಂಗ್ರಹಿಸಿದ ದರವು ಕೇವಲ ಅತ್ಯಲ್ಪವಾಗಿದೆ. ಇದು ರಾಜ್ಯದ ಜನರಿಗೆ ಒಟ್ಟು ಸಹಾಯ ಧನದ ಕಾರ್ಯಕ್ರಮವಾಗಿದೆ ಎಂದು ಪರಿಗಣಿಸಲಾಗಿದೆ.

**(12) ಇಲಾಖೆಯಿಂದ ಮಂಜೂರಾತಿ ನೀಡಿದ ರಿಯಾಯಿತಿಗಳು, ಪರವಾನಗಿಗಳು ಮತ್ತು ಅನುಮತಿಗಳು**:– ಕಾರ್ಮಿಕ ಸಚಿವಾಲಯದಲ್ಲಿ ಇಂತಹ ಪ್ರಕರಣಗಳು ಇರುವುದಿಲ್ಲ.

**(13) ವಿದ್ಯುನ್ಮಾನ ರೂಪದಲ್ಲಿ ಲಭ್ಯವಾಗುವ ಇಲಾಖೆಯ ಮಾಹಿತಿ**:– ರಾಷ್ಟ್ರೀಯ ಮಾಹಿತಿ ಕೇಂದ್ರವು ನಿರ್ವಹಣೆ ಮಾಡಿರುವಂತೆ ಕಾರ್ಮಿಕ ಇಲಾಖೆಯು ಹೊರತಂದಿರುವ ಅಂತರ್ ಜಾಲದಲ್ಲಿ ಕಾರ್ಮಿಕ ಇಲಾಖೆಯ ವಿವರಗಳು ದೊರಕಲಿವೆ. ಇಲಾಖೆಯ ಇಡೀ ವಿವರಗಳನ್ನು http./labour kar.nic.in / labour.secretariat. htm ಈ ಅಂತರ್‌ಜಾಲಕ್ಕೆ ಮೊರೆ ಹೋಗಿ ಪಡೆಯಬಹುದಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಮತ್ತು ಪಾರದರ್ಶಕತೆ ಅಧಿನಿಯಮದ ಪ್ರಕಾರ ನಾಗರೀಕರು ಮಾಹಿತಿಯನ್ನು ಉಚಿತವಾಗಿ ಪಡೆಯಬಹುದಾಗಿದೆ.

**(14) ಮಾಹಿತಿ ಪಡೆಯಲು ನಾಗರೀಕರಿಗೆ ಇರುವ ಸೌಲಭ್ಯ** :– ಸಾರ್ವಜನಿಕ ಸಂಗ್ರಹಣೆ ಮತ್ತು ಪಾರದರ್ಶಕತೆ ಕಾಯಿದೆ ಮತ್ತು ನಾಗರೀಕರ ಸನ್ನದು ಪ್ರಕಾರ ಇಲಾಖೆಯ ಬಗೆಗಿನ ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ಸ್ವಾತಂತ್ರ್ಯವಿದೆ.

**(15) ಇತರೆ ಮಾಹಿತಿ**:– ಈ ಸಚಿವಾಲಯವನ್ನು ಅಗತ್ಯ ಮಾಹಿತಿಗಾಗಿ ಈ ಕೆಳಕಂಡ ಈಮೇಲ್ ವಿಳಾಸಗಳ ಮೂಲಕ ಸಂಪರ್ಕಿಸಬಹುದಾಗಿದೆ.

DS-labour@ yahoo.com ಮತ್ತು jseclabour@gmail.com.

**ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು:–**

**ನಿರ್ಣಯ ತೆಗೆದುಕೊಳ್ಳುವ ಕಾರ್ಯವಿಧಾನ ಈ ಕೆಳಗಿನಂತಿರುತ್ತವೆ.**

- ❖ ವಿಷಯ ನಿರ್ವಾಹಕರು ಪ್ರಸ್ತಾವನೆ / ಪತ್ರಗಳು ಬಂದ ನಂತರ ಅವುಗಳನ್ನು ಪರಿಶೀಲಿಸಿ ಸಂಬಂಧಪಟ್ಟ ಕಡತಗಳೊಂದಿಗೆ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಹೊಸದಾಗಿ ಬಂದ ಪ್ರಸ್ತಾವನೆಗಳಿಗೆ ಹೊಸ ಕಡತ ತೆರೆದು ಪರಿಶೀಲಿಸಿ ಸಲ್ಲಿಸುವುದು.
- ❖ ವಿಷಯ ನಿರ್ವಾಹಕರು ಕಡತದಲ್ಲಿ ಇರುವ ನಿಜಾಂಶಗಳನ್ನು ನಿಯಮಾನುಸಾರ ಪರಿಶೀಲಿಸಿ ಕೈಗೊಳ್ಳಬಹುದಾದಂತಹ ತೀರ್ಮಾನದ ಬಗ್ಗೆ ಟಿಪ್ಪಣಿ ತಯಾರಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸುವುದು.
- ❖ ಅಧೀನ ಕಾರ್ಯದರ್ಶಿಗಳು, ಶಾಖಾಧಿಕಾರಿಗಳು ನೀಡಿದ ಟಿಪ್ಪಣಿಯನ್ನು ಮತ್ತೆ ಪರಿಶೀಲಿಸಿ ಆ ಟಿಪ್ಪಣಿ ಅಸ್ತಿತ್ವದಲ್ಲಿರುವ ನಿಯಮ/ಕಾಯಿದೆ, ಸುತ್ತೋಲೆ ಪ್ರಕಾರ ಇರುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಅವಶ್ಯಕತೆ ಇದ್ದಲ್ಲಿ ಅಧೀನ ಕಛೇರಿಗಳಿಂದ ಮತ್ತು ಇತರೆ ಇಲಾಖೆಗಳಿಂದ ಮಾಹಿತಿ ಪಡೆಯುವುದು. ಅವರಿಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ನಿರ್ಣಯ ತೆಗೆದುಕೊಳ್ಳುವುದು.
- ❖ ಉಪ ಕಾರ್ಯದರ್ಶಿಯವರು ಕಾರ್ಯದರ್ಶಿಗಳಿಗೆ ಕಡತವನ್ನು ಸಲ್ಲಿಸುವ ಮೊದಲು ಕೆಳಗಿನ ಅಧಿಕಾರಿಗಳು ನೀಡಿದ ಟಿಪ್ಪಣಿ ಹಿನ್ನೆಲೆಯಲ್ಲಿ ಆ ಪ್ರಕರಣಗಳಿಗೆ ಸಂಬಂಧಪಟ್ಟ ನಿರ್ಣಯವನ್ನು ತೆಗೆದುಕೊಳ್ಳುವ ಬಗ್ಗೆ ಅವರ ಅಭಿಪ್ರಾಯವನ್ನು ನೀಡಿ ಕಡತಗಳನ್ನು ಕಾರ್ಯದರ್ಶಿಗಳಿಗೆ ಸಲ್ಲಿಸುವುದು. ಅಧೀನ ಅಧಿಕಾರಿಗಳಿಂದ ಮಾಹಿತಿಯನ್ನು ಪಡೆಯುವುದು. ತಮಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿರ್ಣಯ ತೆಗೆದುಕೊಳ್ಳುವುದು.
- ❖ ಕಾರ್ಯದರ್ಶಿಗಳು ಕಡತ ಬಂದ ನಂತರ ಟಿಪ್ಪಣಿಗಳನ್ನು ಪರಿಶೀಲಿಸಿ ನಿಯಮಾನುಸಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು. ಕರ್ನಾಟಕ ಸರ್ಕಾರ (ವ್ಯವಹಾರ ಮತ್ತು ನಿರ್ವಹಣೆ) ನಿಯಮದಂತೆ ಕಡತಗಳನ್ನು ಮಾನ್ಯ ಸಚಿವರಿಗೆ ಸಲ್ಲಿಸುವುದು ಮತ್ತು ಸಚಿವ ಸಂಪುಟಕ್ಕೆ ಸಲ್ಲಿಸುವುದು.
- ❖ ಕಡತದಲ್ಲಿ ನಿರ್ಣಯ ತೆಗೆದುಕೊಂಡ ನಂತರ ಸರ್ಕಾರಿ ಆದೇಶಗಳನ್ನು ಅಧೀನ ಕಾರ್ಯದರ್ಶಿಗಳಿಂದ ಹೊರಡಿಸುವುದು.

**ಪರಿವೀಕ್ಷಣೆ ಮತ್ತು ಜವಾಬ್ದಾರಿ :–**

ವಿಷಯ ನಿರ್ವಾಹಕರ ಕಾರ್ಯವನ್ನು ಶಾಖಾಧಿಕಾರಿಗಳು ಪರಿವೀಕ್ಷಣೆ ಮಾಡುತ್ತಾರೆ. ಶಾಖಾಧಿಕಾರಿಗಳ ಕಾರ್ಯವನ್ನು ಅಧೀನ ಕಾರ್ಯದರ್ಶಿ ಪರಿವೀಕ್ಷಣೆ ಮಾಡುತ್ತಾರೆ. ಅಧೀನ ಕಾರ್ಯದರ್ಶಿಗಳ ಕಾರ್ಯವನ್ನು ಉಪ ಕಾರ್ಯದರ್ಶಿಯವರು ಪರಿವೀಕ್ಷಣೆ ಮಾಡುತ್ತಾರೆ. ಉಪ ಕಾರ್ಯದರ್ಶಿಯವರ ಕಾರ್ಯವನ್ನು ಕಾರ್ಯದರ್ಶಿಗಳು ಪರಿವೀಕ್ಷಣೆ ಮಾಡುತ್ತಾರೆ. ಕಾರ್ಯದರ್ಶಿಗಳ ಕಾರ್ಯವನ್ನು ಮಾನ್ಯ ಕಾರ್ಮಿಕ ಸಚಿವರು ಪರಿವೀಕ್ಷಣೆ ಮಾಡುತ್ತಾರೆ. ಇದೇ ರೀತಿಯಲ್ಲಿ ಇಲಾಖೆಯಲ್ಲಿ ಪ್ರತಿ ಅಧಿಕಾರಿ ತಮ್ಮ ತಮ್ಮ ಕಾರ್ಯಗಳಿಗೆ ಜವಾಬ್ದಾರರಾಗಿರುತ್ತಾರೆ. ಅಲ್ಲದೆ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಲು ಜವಾಬ್ದಾರರಾಗಿರುತ್ತಾರೆ.

**ಕರ್ತವ್ಯಗಳ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಸೂತ್ರಗಳು :–**

1. **ದಲಾಯತ್** :– ಇವರಿಗೆ ವಹಿಸಿದ ಪತ್ರಗಳನ್ನು / ಕಡತಗಳನ್ನು ಅದೇ ದಿನ ಅಧಿಕಾರಿಗಳ ಸೂಚನೆಯಂತೆ ಆಯಾ ಅಧಿಕಾರಿಗಳಿಗೆ ಮತ್ತು ಇಲಾಖೆಗಳಿಗೆ ನೀಡುವುದು.
2. **ವಿಷಯ ನಿರ್ವಾಹಕರು**:– ಇವರು ತಮಗೆ ನೀಡಿದ ಕಾಗದ ಪತ್ರಗಳನ್ನು ಮತ್ತು ಕಡತಗಳನ್ನು ಐದು ದಿನಗಳ ಒಳಗೆ ಸಚಿವಾಲಯ ಕೈಪಿಡಿಯಂತೆ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಶಾಖಾಧಿಕಾರಿಗಳು, ಅಧೀನ ಕಾರ್ಯದರ್ಶಿಗಳು ಇವುಗಳನ್ನು ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

3. **ಉಪ ಕಾರ್ಯದರ್ಶಿಯವರು** :– ಇವರು ಕಡತವನ್ನು ಪಡೆದು ಪರಿಶೀಲಿಸಿ ಆದ್ಯತೆ ಮೇಲೆ ವಿಷಯಗಳನ್ನು ವರ್ಗೀಕರಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಬಾಕಿ ಇರುವ ಕಡತಗಳನ್ನು ವಿಲೇವಾರಿ ಮಾಡಲು ಕ್ರಮ ತೆಗೆದುಕೊಳ್ಳುವುದು, ಕಾರ್ಯದರ್ಶಿಗಳ ಆದ್ಯತೆ ಮೇಲೆ ಕಡತಗಳನ್ನು ವಿಲೇವಾರಿ ಮಾಡುವುದು.

**ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ :–**

- ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ /ಕಚೇರಿ ಕೈಪಿಡಿ.
- ಕರ್ನಾಟಕ ಸರ್ಕಾರ ವ್ಯವಹಾರ ನಿರ್ವಹಣೆ ನಿಯಮಾವಳಿ.
- ಕರ್ನಾಟಕ ಸರ್ಕಾರ ವ್ಯವಹಾರ ಹಂಚಿಕೆ ನಿಯಮಾವಳಿಗಳು.
- ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
- ಕರ್ನಾಟಕ ಸರ್ಕಾರ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು
- ಕರ್ನಾಟಕ ಆರ್ಥಿಕ ಸಂಹಿತೆ
- ಭೂಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ.
- ಮಧ್ಯಸ್ಥಿಕೆ ಕಾಯ್ದೆ 1996 ಮತ್ತು 1940.
- ಸಾಧಿಲ್ವಾರು ವೆಚ್ಚದ ಕೈಪಿಡಿ.
- ಕರ್ನಾಟಕ ಖಜಾನೆ ಸಂಹಿತೆ.
- ಚಾಲ್ತಿ ದರಪಟ್ಟಿ.
- ಬಜೆಟ್ ಕೈಪಿಡಿ.
- ಕರ್ನಾಟಕ ಸರ್ಕಾರಿ ನೌಕರರ ವೈದ್ಯಕೀಯ ನಿಯಮಗಳು 1963.
- ಅನುಕಂಪದ ಆಧಾರದ ಮೇಲೆ ನೇಮಕಾತಿ ನಿಯಮಗಳು.
- ಲೋಕಸೇವಾ ಆಯೋಗ (ಕನ್ಸಲ್ಟೇಷನ್) ರೆಗ್ಯುಲೇಷನ್ 2000.
- ಕರ್ನಾಟಕ ನಾಗರೀಕ ಸೇವೆಗಳು (ಕಾರ್ಯಾಚರಣೆ) ವರದಿಗಳು ನಿಯಮ 1994.
- ಪರಿಶಿಷ್ಟ ಜಾತಿ /ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗಗಳ ಮೀಸಲಾತಿ ನಿಯಮಗಳು
- ಕರ್ನಾಟಕ ನಾಗರೀಕ ಸೇವಾ ಸಾಮಾನ್ಯ ಆಯ್ಕೆ ನಿಯಮಗಳು. 1977.
- ಕರ್ನಾಟಕ ನಾಗರೀಕ ಸೇವಾ ಪ್ರೊಬೇಷನ್ ನಿಯಮಗಳು 1977,
- ಇತರೆ ಕಾಯ್ದೆ / ನಿಯಮಗಳು.

**ದಾಖಲೆಗಳು :–**

ಇಲಾಖೆಯಿಂದ ಹೊರಡಿಸುವ ಸುತ್ತೋಲೆಗಳು ಮತ್ತು ಇತರೆ ಇಲಾಖೆಗಳಿಂದ ನೀಡಿರುವ ಸುತ್ತೋಲೆಗಳು ಸರ್ಕಾರದ ಮಾರ್ಗಸೂಚಿಗಳು.

**ಇಲಾಖೆಯ ಅಧೀನದಲ್ಲಿರುವ ದಾಖಲೆಗಳ ವರ್ಗೀಕರಣದ ತಃಖ್ತೆ :**

ಕಾರ್ಮಿಕ ಇಲಾಖೆಗೆ ಸಂಬಂಧಪಟ್ಟ ಎಲ್ಲಾ ಕಡತಗಳು ಮತ್ತು ವರದಿಗಳು ಇತ್ಯಾದಿ ಈ ಇಲಾಖೆಯ ವಶದಲ್ಲಿರುತ್ತವೆ. ಮುಕ್ತಾಯಗೊಳಿಸಿದ ಕಡತಗಳನ್ನು ಸಚಿವಾಲಯ ಕೈಪಿಡಿಯಂತೆ ಮತ್ತು ಸರ್ಕಾರದ ಆದೇಶದಂತೆ ಎ,ಬಿ.ಸಿ. ಮತ್ತು ಡಿ ಎಂದು ವರ್ಗೀಕರಣ ಮಾಡಲಾಗುವುದು ಮತ್ತು ಅವುಗಳನ್ನು ರೆಕಾರ್ಡ್ ಕೊಠಡಿಗೆ ಕಳುಹಿಸಲಾಗುವುದು.

ವಿಷಯಗಳ ಆದ್ಯತೆ ಮೇಲೆ ಕಡತ ವರ್ಗೀಕರಣ:–

ಎ – ಶಾಶ್ವತವಾಗಿ ಇರುವುದು.

ಬಿ – 25 ವರ್ಷ ಇರುವುದು.

ಸಿ – 5 ವರ್ಷಗಳವರೆಗೆ ಇರುವುದು.

ಡಿ– 1 ವರ್ಷದವರೆಗೆ ಇರುವುದು.

ಮುಕ್ತಾಯಗೊಳಿಸಿದ ಕಡತಗಳನ್ನು ಮರು ಪಡೆಯಬೇಕಾದಲ್ಲಿ ಸಚಿವಾಲಯ ಕೈಪಿಡಿಯಂತೆ ನಿಗದಿತ ನಮೂನೆಯಲ್ಲಿ ಕೋರಿಕೆ ಸಲ್ಲಿಸಿ ದಾಖಲೆ ಕೊಠಡಿಯಿಂದ ಮರು ಪಡೆಯಲಾಗುವುದು.

**ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಗೆ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ :**

ಕಾಮಗಾರಿಗಳ ತಾಂತ್ರಿಕ ಐಕ್ಯತೆ ಬಗ್ಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಅಭಿಪ್ರಾಯವನ್ನು ಪಡೆಯಲಾಗುವುದು. ಕಾನೂನು ಕೋಶದ ಸಲಹೆಗಳನ್ನು ಪಡೆಯಲಾಗುವುದು. ಕಾರ್ಮಿಕ ಯೋಜನೆಯಡಿಯಲ್ಲಿ ಕಾಮಗಾರಿಯನ್ನು ಅನುಷ್ಠಾನಗೊಳಿಸುವಲ್ಲಿ ಆಡಳಿತ ಪರಿಷತ್ತು ಮತ್ತು ಕಾರ್ಯನಿರ್ವಹಣಾ ಸಮಿತಿಯ ಸಲಹೆ ಮತ್ತು ಆದೇಶಗಳನ್ನು ಪಡೆಯಲಾಗುವುದು. ಇತರ ಇಲಾಖೆಗಳ ಅಭಿಪ್ರಾಯ / ಸಲಹೆಗಳನ್ನು ಸಂಬಂಧಪಟ್ಟ ಕಡತಗಳಲ್ಲಿ ಪಡೆಯಲಾಗುವುದು.

**ಕಾರ್ಮಿಕ ಇಲಾಖೆ 2014–15ನೇ ಸಾಲಿಗೆ ಆಯವ್ಯಯದಲ್ಲಿ ಯೋಜನೆ ಇತ್ಯಾದಿಗಳು ಒಳಗೊಂಡಂತೆ ಪ್ರತಿ ಏಜೆನ್ಸಿಗೆ ಹಂಚಿಕೆ ಮಾಡಲಾದ ಅನುದಾನದ ವಿವರಗಳು:–**

| ಕ್ರ.ಸಂ | ಯೋಜನೆಯ ಹೆಸರು | ಲೆಕ್ಕ ಶೀರ್ಷಿಕೆ | ಆಯವ್ಯಯದಲ್ಲಿ ನೀಡಿರುವ ಹಣ ರೂ. ಲಕ್ಷಗಳಲ್ಲಿ |
|---|---|---|---|
| 1. | ನಿರ್ದೇಶನ ಮತ್ತು ಆಡಳಿತ (ಉ ಮತ್ತು ತ ಇಲಾಖೆ) | 2230–02–001–0–01 | 13129.00 |
| 2. | ಸಾಮಾನ್ಯ ಉದ್ಯೋಗ ವಿನಿಮಯ ಕೇಂದ್ರಗಳು | 2230–02–101–0–01 | 30.00 |
| 3. | ಉದ್ಯೋಗ ಪಾರ್ಕ್‌ಗಳು | 2230–02–101–0–07 | ರದ್ದುಗೊಳಿಸಲಾಗಿದೆ |
| 4. | ಕೈಗಾರಿಕಾ ತರಬೇತಿ ಸಂಸ್ಥೆ (ಯೋಜನೆ) | 2230–03–101–0–01 | 8139.00 (ಮರು ಹೊಂದಾಣಿಕೆ ನಂತರ Including SCP & TSP) |
| 5. | ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ (ಸಿ.ಓ.ಇ) | 2230–03–101–0–26 | 2842.00 |
| 6. | ರಾಜ್ಯ ತರಬೇತಿ ಮತ್ತು ಸಂಶೋಧನಾ ಕೇಂದ್ರ | 2230–03–101–0–29 | 100.00 |
| 7. | ರಾಜ್ಯ ಯೋಜನಾ ಅನುಷ್ಠಾನ ಘಟಕ | 2230–03–101–0–30 | 19.00 |
| 8. | ಮಾನವ ಶಕ್ತಿ ಅಭಿವೃದ್ಧಿ ನಿಗಮ ಮತ್ತು ವಾಹನ ಚಾಲನಾ ತರಬೇತಿ ಶಾಲೆ | 2230–03–101–0–31 | ನಿರ್ದೇಶನ ಮತ್ತು ಆಡಳಿತ ಕಾರ್ಯಕ್ರಮದಲ್ಲಿ ವಿಲೀನಗೊಳಿಸಲಾಗಿದೆ |
| 9. | 10 ತಾಲ್ಲೂಕುಗಳಲ್ಲಿ ನೂತನ ಔದ್ಯೋಗಿಕ ತರಬೇತಿ ಸಂಸ್ಥೆಗಳು (47 ಕೈತಸಂ) | 2230–03–101–0–35 | 7762.00 (Including SCP, TSP & SDP) |
| 10. | ವಿದ್ಯಾರ್ಥಿ ಆಧಾರಿತ ಸಹಾಯನುದಾನ ಪದ್ಧತಿ | 2230–03–101–0–36 | 2.00 |
| 11. | ಮಾಡ್ಯುಲಾರ್ ತರಬೇತಿ | 2230–03–101–0–38 | 1000.00 |
| 12. | ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳು | 2230–03–101–0–40 | 2.00 |
| 13. | ಇನ್ಸ್‌ಸ್ಟ್ರಕ್ಟರ್ ಟ್ರೈನಿಂಗ್ ವಿಂಗ್ (ಸಿಟಿಟಿಡಬ್ಲ್ಯೂ) | 2230–03–101–0–42 | 800.00 |
| 14. | ಕರ್ನಾಟಕ–ಜರ್ಮನ್ ಕೌಶಲ್ಯ ಅಭಿವೃದ್ಧಿ ಕೇಂದ್ರ (ಕೆಜಿಎಂಎಸ್‌ಡಿ) | 2230–03–101–0–43 | 2600.00 |
| 15. | ಪಿಪಿಪಿ ಮುಖಾಂತರ ಉದ್ಯೋಗ ತರಬೇತಿ ಕೇಂದ್ರ ಉನ್ನತೀಕರಣ | 2230–03–101–0–45 | 2.00 |
| 16. | ನಬಾರ್ಡ್ ಕಾಮಗಾರಿಗಳು | 4250–00–203–0–01 | 3000.00 (ಪರಿಷ್ಕೃತ ಅನುದಾನ including SDP) |
| 17. | ಕಾರ್ಮಿಕ ಕಾನೂನು ಸಮಾಚರಣೆ | 2230–01–101–0–01 | 350.00 |
| 18. | ಬಾಲ ಕಾರ್ಮಿಕ ಪುನರ್ವಸತಿ | 2230–01–103–6–01 | 454.00 |
| 19. | ಕಾರ್ಮಿಕ ಭವನ ನಿರ್ಮಾಣ | 4250–00–201–0–04 | 500.00 |
| 20. | ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ಸಹಾಯನುದಾನ | 2230–01–103–7–00 | 7.00 |
| 21. | ಕಾರ್ಮಿಕ ಕಲ್ಯಾಣ ಮಂಡಳಿ ಅಂಶದನ | 2230–01–103–4–00 | 225.00 |
| 22. | ಕರ್ನಾಟಕ ಕಾರ್ಮಿಕ ಅಧ್ಯಯನ ಸಂಸ್ಥೆ (ರಾಷ್ಟ್ರೀಯ ಕಾನೂನು ಶಾಲೆ) | 2230–01–277–0–01 | 100.00 |
| 23. | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ. | 2230–01–111–0–05 | 114.00 |
| 24. | ರಾಷ್ಟ್ರೀಯ ಸ್ವಾಸ್ಥ್ಯ ಭೀಮಾ ಯೋಜನೆ | 2230–01–103–7–02 | 5678.00 |
| 25. | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ನೂತನ ಪಿಂಚಣಿ ವ್ಯವಸ್ಥೆಗಾಗಿ ವಂತಿಕೆ | 2230–01–800–0–04 | 700.00 |
| 26. | ಚಾಲಕರಿಗೆ ವಿಮೆ ಯೋಜನೆ (ಹೊಸ ಯೋಜನೆ) | 2230–01–103–7–03 | 750 |
| 27. | ಅಸಂಘಟಿತ ಕಾರ್ಮಿಕರಿಗೆ ಜನಶ್ರೀ ಭೀಮಾ ಯೋಜನೆ | 2230–01–103–1–01 | 600.00 |

| | | | |
|---|---|---|---|
| 28. | ಹುದ್ದೆಗಳ ಮುಂದುವರಿಕೆಗೆ (ಕಾರಾವಿ ಇಲಾಖೆ) | 2210–01–102–0–01 | 10101.00 |
| 29. | ಕಾರ್ಖಾನೆಗಳ ಪರಿವೀಕ್ಷಕರು ಕೆಲಸದ ಸ್ಥಿತಿಗಳು ಮತ್ತು ಭದ್ರತೆ | 2230–01–102–0–01 | 130 ಲಕ್ಷಗಳು ಮೂಲ ಅನುದಾನದಲ್ಲಿ SCP/TSP ಸೇರಿದೆ |

ಇತರೆ ವಿವರಗಳು ಏನೂ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಉಪ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

**P.R.612**

**S.C. 400**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 04 ಎಆರ್‌ಬಿ 2015, ಬೆಂಗಳೂರು, ದಿನಾಂಕ: 27–08–2015.**

ಭಾರತ ಸಂವಿಧಾನದ 166 ನೇ ಅನುಚ್ಛೇದದ (2) ಮತ್ತು (3) ನೇ ಖಂಡಗಳಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮೂಲಕ ಕರ್ನಾಟಕ ಸರ್ಕಾರ (ಕೆಲಸಗಳ ಹಂಚಿಕೆ) ನಿಯಮಗಳು, 1977 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ರಚಿಸಿದ್ದಾರೆ, ಎಂದರೆ,–

1. **ಹೆಸರು ಮತ್ತು ಪ್ರಾರಂಭ** :– 1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ಕೆಲಸಗಳ ಹಂಚಿಕೆ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

   2) ಇವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಅನುಸೂಚಿ VI ಕ್ಕೆ ತಿದ್ದುಪಡಿ** :– ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು, 1977 ರ ಅನುಸೂಚಿ VI ರ **"ಹಣಕಾಸು ಇಲಾಖೆ"** ಶೀರ್ಷಿಕೆಯಡಿಯಲ್ಲಿ, ಉಪಶೀರ್ಷಿಕೆ **"**ಇ ರಾಜ್ಯ ಲೆಕ್ಕಪತ್ರ ಇಲಾಖೆ**"** ಮತ್ತು ಅದರಡಿಯಲ್ಲಿನ ನಮೂದುಗಳಿಗೆ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು, ಎಂದರೆ,–

   **ಇ. ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ**
   ಕರ್ನಾಟದ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ.

**ವಾಜುಬಾಯಿ ವಾಲಾ,**
ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ.ಮಂಗಳ ಜಿ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವಾ ನಿಯಮಗಳು–1)

## PERSONNEL AND ADMINISTRATIVE REFORMS SECRETARIAT

### Notification

**No: DPAR 04 ARB 2015, Bengaluru Dated:27.08.2015.**

In exercise of the powers conferred by clauses (2) and (3) of Article 166 of Constitution of India, the Governor of Karnataka hereby makes the following rules further to amend the Karnataka Government (Allocation of Business) Rules, 1977, namely :-

1. **Title and Commencement** :- 1) These rules may be called the Karnataka Government (Allocation of Business) (Amendment) Rules 2015.

   2) It shall come into force on the date of their publication in the Offical Gazette.

2. **Amendment of Schedule VI** : In the Karnataka Government (Allocation of Business) Rules, 1977, in Schedule-VI, Under the heading **"Finance Department"**, for the sub-heading **"E. State Accounts Department",** and the entries thereunder, the following shall be substituted, namely, -

   **"E, Karnataka State Audit and Accounts Department**
   Karnataka State Audit and Accounts Department"

**PR. 12**

**SC. 200**

**Vajubhai vala,**
Governor of Karnataka**,**
By Order and in the name of the Governor of Karnataka
**Dr. Mangala G.S**
Under Secretary to Government,
Department of Personal and Administrative,
Reforms (Service Rules-1).

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 676 ಪಿಎಂಎಸ್ 2014, ಬೆಂಗಳೂರು, ದಿನಾಂಕ: 14–12–2015.**

1872ರ ಭಾರತೀಯ ಕ್ರಿಶ್ಚಿಯನ್ ವಿವಾಹ ಕಾಯಿದೆಯ ಕಲಂ 7 (ಕೇಂದ್ರ ಕಾಯ್ದೆ, XV) ರನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ **ಶ್ರೀಮತಿ ಜೆ. ಮೇರಿ ಸುಶೀಲಾ, ನಂ. 108, 2ನೇ 'ಡಿ' ಕ್ರಾಸ್, ಒಎಂಬಿಆರ್ ಲೇಔಟ್, ಬಾಣಸವಾಡಿ, ಬೆಂಗಳೂರು–560043** ಇವರನ್ನು ಕ್ರಿಶ್ಚಿಯನ್ ಸಂಪ್ರದಾಯದ ಪ್ರಕಾರ ವಿವಾಹ ನೋಂದಣಿ ಉದ್ದೇಶಕ್ಕಾಗಿ ಬೆಂಗಳೂರು ಜಿಲ್ಲೆಗೆ ಸೀಮಿತಗೊಳಿಸಿ ಮೇಲಿನ ಕಾಯಿದೆಯಡಿಯಲ್ಲಿ ಸೂಚಿಸಿರುವ ಷರತ್ತಿಗೊಳಪಟ್ಟು ಕ್ರಿಶ್ಚಿಯನ್ ಜನಾಂಗದ ವಿವಾಹ ನೋಂದಣಾಧಿಕಾರಿಯನ್ನಾಗಿ ಕಾರ್ಯನಿರ್ವಹಿಸಲು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಸದರಿ ಕಾಯ್ದೆಯಡಿ ಪ್ರದತ್ತವಾಗಿರುವಂತೆ ಅರ್ಜಿದಾರನು ತಾವು ನೆರವೇರಿಸುವ ಪ್ರತಿ ವಿವಾಹದ ವಿವರಗಳನ್ನು ಕಡ್ಡಾಯವಾಗಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಕರ್ನಾಟಕ, ಬೆಂಗಳೂರು (Inspector General of Registration and Commissioner for Stamps in Karnataka, Bengaluru) ಇವರಿಗೆ ಕಳುಹಿಸತಕ್ಕದ್ದು.

**PR-15**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ರಹದಾರಿ ಮತ್ತು ವಿದೇಶಿಯರು)

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 336 ಪಿಎಂಎಸ್ 2014, ಬೆಂಗಳೂರು, ದಿನಾಂಕ: 14–12–2015.**

1872ರ ಭಾರತೀಯ ಕ್ರಿಶ್ಚಿಯನ್ ವಿವಾಹ ಕಾಯಿದೆಯ ಕಲಂ 9 ರನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಭಾರತೀಯ ಕ್ರಿಶ್ಚಿಯನ್ ವಿವಾಹ (ಕರ್ನಾಟಕ) ನಿಯಮಗಳು 1961 ರಂತೆ **Rev. T Daniel Christudas, IFCM Covenant Church, 739, 4th Main Road, A Munireddy Layout, Horamava Main Road, Dodda Banaswadi, Bengaluru-43** ಇವರನ್ನು ಬೆಂಗಳೂರು ಜಿಲ್ಲೆಗೆ ಸೀಮಿತಗೊಳಿಸಿ ಮೇಲಿನ ಕಾಯಿದೆಯಡಿಯ ಷರತ್ತಿಗೊಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕ್ರಿಶ್ಚಿಯನ್ ಜನಾಂಗದ ವಿವಾಹ ವಿಧಿಯನ್ನು ನೆರವೇರಿಸಲು ಅನುಮತಿಯನ್ನು ನೀಡಿದೆ.

ಸದರಿ ಕಾಯ್ದೆಯಡಿ ಪ್ರದತ್ತವಾಗಿರುವಂತೆ ಅರ್ಜಿದಾರನು ತಾವು ನೆರವೇರಿಸುವ ಪ್ರತಿ ವಿವಾಹದ ವಿವರಗಳನ್ನು ಕಡ್ಡಾಯವಾಗಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು, ಕರ್ನಾಟಕ, ಬೆಂಗಳೂರು (Inspector General of Registration and Commissioner for Stamps in Karnataka, Bengaluru) ಇವರಿಗೆ ಕಳುಹಿಸತಕ್ಕದ್ದು.

**PR-16**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ರಹದಾರಿ ಮತ್ತು ವಿದೇಶಿಯರು)

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 222 ಕೆಬಿಎನ್ 2015 ಬೆಂಗಳೂರು, ದಿನಾಂಕ: 30–09–2015.**

ಪ್ರೊ. ಅರವಿಂದ ಗಲಗಲಿ, ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 147(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂಪನಿ ಕಾಯ್ದೆ 2013ರ ಕಲಂ 149(4) ಮತ್ತು ಕಲಂ 149(6)ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯಲ್ಲಿ ಸ್ವತಂತ್ರ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅರವಿಂದ ಬಾಬು ಜಿ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿ).

**PR.-625**

**SC-25**

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 222 ಕೆಬಿಎನ್ 2015 ಬೆಂಗಳೂರು, ದಿನಾಂಕ: 30–09–2015.**

ಶ್ರೀ ಕೆ.ಸಿ.ರೆಡ್ಡಿ, ನಿವೃತ್ತ ಲೋಕೋಪಯೋಗಿ ಮತ್ತು ಇಂಧನ ಇಲಾಖೆ ಆಯುಕ್ತರು ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 147(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂಪನಿ ಕಾಯ್ದೆ

2013ರ ಕಲಂ 149(4) ಮತ್ತು ಕಲಂ 149(6)ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯಲ್ಲಿ ಸ್ವತಂತ್ರ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅರವಿಂದ ಬಾಬು ಜಿ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿ).

**PR.-626**
**SC-25**

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 222 ಕೆಬಿಎನ್ 2015 ಬೆಂಗಳೂರು, ದಿನಾಂಕ: 30–09–2015.**

**ಶ್ರೀಮತಿ ವಂದಿತಾ ಶರ್ಮಾ,** ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮೂಲ ಸೌಕರ್ಯ ಅಭಿವೃದ್ಧಿ ಇಲಾಖೆ ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 147(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂಪನಿ ಕಾಯ್ದೆ 2013ರ ಕಲಂ 149(1)(ಬಿ)ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯಲ್ಲಿ **ಮಹಿಳಾ ನಿರ್ದೇಶಕರನ್ನಾಗಿ ಶ್ರೀ ಎಸ್.ರಾಮದಾಸ್** ಇವರ ಸ್ಥಾನದಲ್ಲಿ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅರವಿಂದ ಬಾಬು ಜಿ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿ).

**PR.-627**
**SC-25**

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 226 ಕೆಬಿಎನ್ 2015 ಬೆಂಗಳೂರು, ದಿನಾಂಕ: 26–09–2015.**

ಶ್ರೀ ಅಂಜುಮ್ ಪರ್ವೇಜ್, ಭಾ.ಆ.ಸೇ., ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 147(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರಾಗಿ ಹಾಗೂ ಆರ್ಟಿಕಲ್ 151ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಾಗಿ ಶ್ರೀ ಅಜಯ್ ಸೇಠ್, ಭಾ.ಆ.ಸೇ., ಇವರ ಸ್ಥಾನದಲ್ಲಿ ದಿನಾಂಕ: 10–08–2015ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅರವಿಂದ ಬಾಬು ಜಿ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿ).

**PR.-628**
**SC-25**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 224 ಬೆಮಪ್ರಾ 2015, ಬೆಂಗಳೂರು, ದಿನಾಂಕ: 04–11–2015.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬೆಳಗಾವಿ ಜಿಲ್ಲೆ ರಾಮದುರ್ಗ ಪಟ್ಟಣದ ವಿಸ್ತೃತ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗವನ್ನು ಗುರುತಿಸಲು ದಿನಾಂಕ : 01–04–2015 ರಿಂದ ಜಾರಿಗೆ ಬರುವಂತೆ ದಿನಾಂಕವನ್ನು ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**P.R. 647**
**SC-50**

## BACKWARD CLASSES WELFARE SECRETARIAT

### NOTIFICATION

**NO.BCW 306 BET 2014, Bengaluru, dated:05.11.2015**

Whereas the draft of the Karnataka Backward Classes Welfare Department Services (Cadre and Recruitment) (Amendment) Rules, 2015, was published as required by sub section (2) of section 3 of the Karnataka State Civil Services Act, 1978 (Karnataka Act 14 of 1990) in Notification No.BCW 306 BET 2015, dated:26.08.2015 in Part IV-A of the Karnataka Gazette (Extra Ordinary), dated

26.08.2015 inviting objections and suggestion from all persons likely to be affected thereby within 15 days from the date of publication in the official Gazette.

And whereas the said Gazette was made available to the public on 26.08.2015.

And whereas objections and suggesstions received have been examined by the Government.

Now, therefore, in exercise of the powers conferred by sub-section (1) of section 3, read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following Rules, namely:-

**RULES**

1. **Title and Commencement**.- (1) These rules may be called the Karnataka Backward Classes Welfare Department services (Cadre and Recruitment) (Amendment) Rules, 2015.

(2) They shall come into force from the date of their publication in the official gazette.

**2. Amendment of schedule.-** In the Karnataka Backward Classes Welfare Department Services (Cadre and Recruitment) Rules 1997, in schedule,-

(1) for the entries relating to the category of posts or "Hostel Superintendent (men)" at serial number 27, the following shall be substitued, namely:-

| 1 | 2 | 3 | 4 | 5 | 6 |
|---|---|---|---|---|---|
| 27. | Hostel Superintendent (Men)<br>Rs.14550-26700 | 1056 | - | Seventy percent by direct Recruitment, in accordance with the Karnataka Civil Services (Direct recruitment by Competitive Examination and Selection) (General) Rules, 2006; and<br><br>five percent by Direct Recruitment quota from in-service candidates in the cadre of Second Division Assistant (Male), Ashrama School Teachers (male), Typist, Drivers, Cooks, Kitchen Servants, Peons from male category; and<br>twenty five percent by promotion from the cadre of Junior Hostel Superintendent (male) and Ashrama School Teacher (Male) in the ratio of 3:2, every 4th and 5th vacancy be filled by promotion of Ashrama School Teachers (male); | **For Direct Recruitment under seventy percent.-**<br>Must be a holder of a degree with degree in Education.<br>**For Direct Recruitment under five percent quota.-**<br><br>(1) Must be a holder of a degree with degree in Education.<br>(2)Must have put in a service of not less than five years in the cadres specified in column (5);<br>(3)Notwithstanding anything contained in the Karnataka Civil Services (General Recruitment) Rules, 1977, the upper age limit shall be,-<br>(i) 50 years in the case of person belonging to any of the Scheduled Castes or Scheduled Tribes or Category-1 of the Backward Classes;<br>(ii) 48 years in the case of person belonging to any of the category-II(a) or II(b), III(a) or III(b) of other Backward Classes; and<br>(iii) 45 years in the case of any other person; on the last date fixed for the receipt of applications or on such other date, as may be specified by the appointing authority.<br>**For promotion**.- Must have put in a service of not less than five years in the cadre of Junior Hostel Superintendent (male) and Ashrama School Teachers (Male).<br>Provided that if no persons who have put in a service of not less than five years are available persons who have put in a service of not less than three years may be considered. |

(2) for the entries relating to the category of posts of "Hostel Superintendents (Women)" at serial number 28 and entries relating thereto, the following shall be substituted, namely:-

| 1 | 2 | 3 | 4 | 5 | 6 |
|---|---|---|---|---|---|
| 28. | Hostel Superintendent (Women)<br>Rs.14550-26700 | 284 | - | Seventy percent by direct Recruitment, in accordance with the Karnataka Civil Services (Direct recruitment by Competitive Examination and Selection) (General) Rules, 2006; and<br>five percent by Direct Recruitment quota from in-service candidates in the cadre of Second Division Assistant (Women), Ashrama School Teachers (Women), Typist, Drivers, Cooks, Kitchen Servants, Watchmen (Women) and Peons from Woman category; and<br>twenty five percent by promotion from the cadre of Junior Hostel Superintendent (Women) and Ashrama School Teacher (Women) and Women Welfare Organizers in the ratio of 6:3:1, every 7th vacancy be filled by promotion of Ashrama School Teachers (Woman) and every 10th vacancy filled by promotion of Women Welfare Organizers. | **For Direct Recruitment under seven ty percent.-**<br>Must be a holder of a degree with degree in Education.<br>**For Direct Recruitment under five percent for inservice candidates.-**<br>(1) Must be a holder of a degree with degree in Education.<br>(2)Must have put in a service of not less than five years in the cadres specified in column (5);<br>(3)Notwithstanding anything contained in the Karnataka Civl Services (General Recruitment) Rules, 1977, the upper age limit shall be,-<br>(i)50 years in the case of person belonging to any of the Scheduled Castes or Scheduled Tribes or Category-1 of the Backward Classes;<br>(ii)48 years in the case of person belonging to any of the category-II(a) or II(b), III(a) or III(b) of other Backward Classes; and<br>(iii) 45 years in the case of any other person on the last date fixed for the receipt of applications or on such other date, as may be specified by the appointing authority.<br>**For promotion from the cadre of Junior Hostel Superintendent (Women).-** Must have put in a service of not less than five years in the cadre of Junior Hostel superintendent (women) and Ashrama School Teachers (Women) and Women Welfare Organisers.<br>Provided that if no persons who have put in a service of not less than five years are available, persons who have put in a service of not less than three years may be considered. |

(3) After the category of the posts of "Hostel Superintendent (Female)" at serial number 28 and entries relating thereto, the following shall be inserted, namely:-

| | | | | | |
|---|---|---|---|---|---|
| 28 A | Junior Hostel Superintendent (Men)<br>(Rs. 11600-21000) | 59 | -- | By promotion from the cadre of Cooks (male), Kitchen servant(male), Watch man (male) and Peon from male category on the basis of combined Seniority.<br>Seniority being determined by treating a person holding a post carrying a higher scale of pay as senior to the person holding a post | **For promotion:-**<br>(1)Must have passed SSLC or equivalent examination.<br>(2)Must have put in a service of not less than seven years in the cadre of cooks (male), Kitchen servant(male), Watchman (male) or Peon from male category of which |

| | | | | | |
|---|---|---|---|---|---|
| | | | | carrying a lower scale of pay. Seniority interse among persons holding posts carrying the same scale of pay, being determined on the basis of length of service in the respective cadres and seniority interse in a cadre being maintained. | not less than five years of service shall be after passing SSLC.<br>(3) Must have the knowledge in reading and writing in Kannada. |
| 28 B | Junior Hostel Superintendent (Women) (Rs.11600-21000) | 71 | -- | By promotion from the cadre of Cooks (Women), Kitchen Servant (Women), Watchman (Women) Peon (women) and executive (Women development centers) on the basis of combinded Seniority. Seniority being determined by treating persons holding a post carrying a higher scale of pay as senior to a person holding a post carrying a lower scale of pay. Seniority interse among persons holding posts carrying the same scale of pay, being determined on the basis of length of service in the respective cadres and seniority interse in a cadre be maintained. | **For promotion:-**<br><br>(1)Must have passed SSLC or equivalent examination.<br><br>(2)Must have put in a service of not less than seven years in the cadres specified in column (5) of which not less than five years of service shall be after passing S.S.L.C. and<br><br>(3) Must have the knowledge in reading and writing in Kannada. |

**P.R. 648**
**SC-500**

By order and in the name of the Governor of Karnataka
**N.R.Erekuppi**
Under Secretary to Government-1
Backward Classes Welfare Department.

**BACKWARD CLASSES WELFARE SECRETARIAT**

**NOTIFICATION**

**NO.BCW 529 BET 2015, Bengaluru, dated: 07.11.2015**

In exercise of the powers conferred under clause (3) and (7) of rule II of the rules and regulations of the Memorandum of the Association of the Karnataka Residential Educational Institutions Society (Cadre and Recruitment) Regulation, 2011, the Governing council of the Karnataka Residential Education Institutions Society with the approval of the Government of Karnataka vide GO No. BCW 529 BET 2015, Dated : 7-11-2015 hereby makes the following regulations further to amend the Karnataka Residential Educational Institutions Society (Cadre and Recruitment) Regulations, 2011 namely :-

REGULATIONS

**1. Title and Commencement.-** (1) These regulations may be called the Karnatka Residential Educational Institutions Society (Cadre and Recruitment) (Amendment) Regulations, 2015,-

(2) They shall come into force on the date of registration of these regulations under sub-section (2) of section 10 of the Karnataka Societies Registrations Act, 1960. (Karnataka Act 17 of 1960).

**2. Amendment of the Schedule-I :-** In of the Karnataka Residential Education Institutions Society (Cadre and Recruitment) Regualtions 2011, in schedule I,-

(1) In the entries relating to the category of posts of SDA Cum Computer Operator at serial No. 19 in column 5, under the heading **Minimum Qualification,-**

(a) For the para and the entries relating there to the following shall be substituted namely :-

"Must have passed Pre University Course Examination or equivalent examination recognized by Government of Karnataka. Must have Computer working knowledge with six months computer course certificate recognized by Government of Karnataka or by Society."

**P.R. 650**
**SC-500**

By order and in the name of the Governor of Karnataka
**N.R.Erekuppi**
Under Secretary to Government-1
Backward Classes Welfare Department.

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಹಿಂವಕ 488 ಬಿಇಟಿ 2015, ಬೆಂಗಳೂರು, ದಿನಾಂಕ:03-11-2015.**

ಭಾರತದ ಸಂವಿಧಾನ ಅನುಚ್ಛೇದ 371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಅನ್ವಯ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕಾರ್ಯ ನಿರ್ವಾಹಕ ನಿರ್ದೇಶಕರ ಕಛೇರಿ, ಬೆಂಗಳೂರು ಮತ್ತು ಇದರ ವ್ಯಾಪ್ತಿಯಲ್ಲಿ ಬರುವ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಚಾಮರಾಜಪೇಟೆ, ಬೆಂಗಳೂರು ಈ ಎರಡು ಸಂಸ್ಥೆಗಳನ್ನು ರಾಜ್ಯ ಮಟ್ಟದ ಸಂಸ್ಥೆಗಳೆಂದು ಗುರುತಿಸಲಾಗಿದೆ. ಸದರಿ ಸಂಸ್ಥೆಗಳಲ್ಲಿನ ಸೇವೆಯಲ್ಲಿನ ಹುದ್ದೆಗಳಲ್ಲಿ ಮತ್ತು ಹೈದರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲಾ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮೊರಾರ್ಜಿ ದೇಸಾಯಿ/ಕಿತ್ತೂರು ರಾಣಿ ಚೆನ್ನಮ್ಮ/ಏಕಲವ್ಯ/ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆಗಳ ಹುದ್ದೆಗಳಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ವ್ಯಾಪ್ತಿಯ ಸ್ಥಳಿಯ ವ್ಯಕ್ತಿಗಳಿಗೆ ರಾಜ್ಯ ಮಟ್ಟದ ಸ್ಥಳೀಯ ವೃಂದ ಮತ್ತು ಪ್ರಾದೇಶಿಕ ಸ್ಥಳೀಯ ವೃಂದಗಳನ್ನು ರಚಿಸಿ ನಿಗಧಿಪಡಿಸಲಾದ ಶೇಕಡಾವಾರು ಹುದ್ದೆಗಳನ್ನು ಅನುಸೂಚಿ-1 ಮತ್ತು 2ರಲ್ಲಿರುವಂತೆ, ವೃಂದವಾರು ಮೀಸಲಿರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ:ಬಿಸಿಡಬ್ಲ್ಯೂ488 ಬಿಇಟಿ 2015, ದಿನಾಂಕ:02-11-2015ಕ್ಕೆ ಅನುಸೂಚಿ-1**

**ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಕೇಂದ್ರ ಕಛೇರಿ ಹಾಗೂ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಚಾಮರಾಜಪೇಟೆ, ಬೆಂಗಳೂರು**

| ಕ್ರ.ಸಂ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಹುದ್ದೆಗಳು | | | | ರಾಜ್ಯ ಮಟ್ಟದ ಸ್ಥಳೀಯವಲ್ಲದ ವೃಂದದಲ್ಲಿ ಗುರುತಿಸಲಾದ ಹುದ್ದೆಗಳು | | | | ಷರಾ |
|---|---|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
| **ಗ್ರೂಪ್ - ಎ ವೃಂದ - (8% ಮೀಸಲಾತಿ)** | | | | | | | | | | | | | | | |
| 1 | ಸಹಾಯಕ ನಿರ್ದೇಶಕರು/ಸಹಾಯಕ ಕಾರ್ಯಪಾಲಕ ಅಭಿಯಂತರು | 28100-50100 | 14 | - | - | 14 | - | - | 2 | 2 | - | - | 12 | 12 | ನಿಯೋಜನೆ |
| **ಗ್ರೂಪ್ - ಬಿ ವೃಂದ - (8% ಮೀಸಲಾತಿ)** | | | | | | | | | | | | | | | |
| 1 | ಯೋಜನಾಧಿಕಾರಿಗಳು/ ಆಡಿಟರ್ಸ್ | 22800-43200 | 5 | - | - | 5 | - | - | 1 | 1 | - | - | 4 | 4 | ನಿಯೋಜನೆ |
| 2 | ಪ್ರಾಂಶುಪಾಲರು | 22800-43200 | 1 | 1 | - | - | - | - | | - | 1 | - | - | 1 | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
|---|---|---|---|---|---|---|---|---|---|---|---|---|---|---|---|
| ಗ್ರೂಪ್ – ಸಿ ವೃಂದ – (8% ಮೀಸಲಾತಿ) | | | | | | | | | | | | | | | |
| 1 | ಕಛೇರಿ ಅಧೀಕ್ಷಕರು | 20000–36300 | 3 | – | – | 3 | – | – | 1 | 1 | – | – | 2 | 2 | |
| 2 | ಸಹಾಯಕ ಅಭಿಯಂತರು | 22800–43200 | 12 | – | – | 12 | – | – | 1 | 1 | – | – | 11 | 11 | ನಿಯೋಜನೆ |
| 3 | ಕಿರಿಯ ಅಭಿಯಂತರು | 17650–32000 | 14 | – | – | 14 | – | – | 2 | 2 | – | – | 12 | 12 | ನಿಯೋಜನೆ |
| 4 | ಕನ್ನಡ ಶಿಕ್ಷಕರು/ಹಿಂದಿ–ಉರ್ದು ಶಿಕ್ಷಕರು/ಆಂಗ್ಲ ಶಿಕ್ಷಕರು/ಗಣಿತ (ಪಿಸಿಎಂಬಿ) ಶಿಕ್ಷಕರು/ವಿಜ್ಞಾನ (ಸಿಬಿಜಡ್) ಶಿಕ್ಷಕರು/ಸಮಾಜ ವಿಜ್ಞಾನ (ಆರ್ಟ್ಸ್) ಶಿಕ್ಷಕರು/ದೈಹಿಕ ಶಿಕ್ಷಕರು/ಸಂಗೀತ ಶಿಕ್ಷಕರು/ಕಂಪ್ಯೂಟರ್ ಶಿಕ್ಷಕರು | 17650–32000 | 9 | 9 | – | – | 1 | – | – | 1 | 8 | – | – | 8 | |
| 5 | ಕ್ರಾಫ್ಟ್ ಶಿಕ್ಷಕರು/ಸ್ಟಾಫ್ ನರ್ಸ್ | 16000–29600 | 2 | 2 | – | – | 1 | – | – | 1 | 1 | – | – | 1 | |
| 6 | ನಿಲಯಪಾಲಕರು/ಪ್ರಥಮ ದರ್ಜೆ ಸಹಾಯಕರು(ಕಂಪ್ಯೂಟರ್ ಜ್ಞಾನವುಳ್ಳವರು)/ಸ್ಟೆನೊಗ್ರಾಫರ್ ಕಮ್ ಡೇಟಾ ಎಂಟ್ರಿ ಆಪರೇಟರ್/ಕಾರ್ಯನಿರ್ವಾಹಕ ಸಹಾಯಕರು | 14550–26700 | 7 | 7 | – | – | 1 | – | – | 1 | 6 | – | – | 6 | |
| 7 | ಡ್ರಾಫ್ಟ ಮನ್ | 14550–26700 | 2 | – | – | 2 | – | – | 1 | 1 | – | – | 1 | 1 | |
| 8 | ಗುಮಾಸ್ತರು ಕಮ್ ಬೆರಳಚ್ಚುಗಾರರು | 11600–21000 | 7 | 7 | – | – | 1 | – | – | 1 | 6 | – | – | 6 | |
| 9 | ವಾಹನ ಚಾಲಕರು | 11600–21000 | 5 | 5 | – | – | 1 | – | – | 1 | 4 | – | – | 4 | |
| ಗ್ರೂಪ್ – ಡಿ ವೃಂದ – (8% ಮೀಸಲಾತಿ) | | | | | | | | | | | | | | | |
| 1 | ಅಡುಗೆಯವರು | 10200–16400 | 3 | 2 | 1 | – | 1 | – | – | 1 | 1 | 1 | – | 2 | |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
|---|---|---|---|---|---|---|---|---|---|---|---|---|---|---|---|
| 2 | ಅಡುಗೆ ಸಹಾಯಕರು/ ಗ್ರೂಪ್ ಡಿ/ ಕಾವಲುಗಾರರು/ ಸ್ವಚ್ಛತಾ ಸಿಬ್ಬಂದಿ | 9600–14550 | 15 | 15 | – | – | 2 | – | – | 2 | 13 | – | – | 13 | |

**ಟಿಪ್ಪಣಿ :** ಏಕರೂಪ ವೇತನ ಶ್ರೇಣಿಯಲ್ಲಿ ನೇರ ನೇಮಕಾತಿ/ನಿಯೋಜನೆ ಮೂಲಕ ಭರ್ತಿ ಮಾಡುವ ಹುದ್ದೆಗಳನ್ನು ಸಂಯುಕ್ತಗೊಳಿಸಿದ್ದು ಖಾಲಿ ಹುದ್ದೆಗಳು ಲಭ್ಯವಾಗುವ ಸಮಯದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಗುರುತಿಸಲಾದ ಹುದ್ದೆಗಳನ್ನು ರೊಟೇಷನ್ ಆಧಾರದ ಮೇಲೆ ನೇರ ನೇಮಕಾತಿ/ನಿಯೋಜನೆ ಮೂಲಕ ಭರ್ತಿ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ:ಬಿಸಿಡಬ್ಲ್ಯೂ488 ಬಿಇಟಿ 2015, ದಿನಾಂಕ:02–11–2015ಕ್ಕೆ ಅನುಸೂಚಿ–2**

**ಹೈದರಾಬಾದ್–ಕರ್ನಾಟಕ ಪ್ರದೇಶದ ಪ್ರಾದೇಶಿಕ ಸ್ಥಳೀಯ ವೃಂದದ ಹುದ್ದೆಗಳು**

**(ಅ) ಮೊರಾರ್ಜಿ ದೇಸಾಯಿ ಮಾದರಿ ವಸತಿ ಕಾಲೇಜುಗಳು**

| ಕ್ರ.ಸ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | ಸ್ಥಳೀಯ ವೃಂದದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಮೀಸಲಿರಿಸಲಾದ ಹುದ್ದೆಗಳು | | | ಪ್ರಾದೇಶಿಕ ಸ್ಥಳೀಯವಲ್ಲದ ವೃಂದದ ಹುದ್ದೆಗಳು (ಉಳಿದ ಮೂಲ ವೃಂದ) | | |
|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ಒಟ್ಟು | ನೇರ ನೇಮಕಾತಿ | ಮುಂಬಡ್ತಿ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| | | | | **ಗ್ರೂಪ್–ಎ (ಶೇ.75 ರ ಮೀಸಲಾತಿ)** | | | | | | | |
| 1 | ಪ್ರಾಂಶುಪಾಲರು | 30400–51300 | 4 | 4 | – | 3 | – | 3 | 1 | – | 1 |
| | | | | **ಗ್ರೂಪ್–ಬಿ (ಶೇ.75 ರ ಮೀಸಲಾತಿ)** | | | | | | | |
| 1 | ಭಾಷಾ ಉಪನ್ಯಾಸಕರು | 22800–43200 | 8 | 8 | – | 6 | – | 6 | 2 | – | 2 |
| 2 | ಐಚ್ಛಿಕ ವಿಷಯಗಳ ಉಪನ್ಯಾಸಕರು | 22800–43200 | 20 | 20 | – | 15 | – | 15 | 5 | – | 5 |
| | | | | **ಗ್ರೂಪ್–ಸಿ (ಶೇ. 80 ರ ಮೀಸಲಾತಿ)** | | | | | | | |
| 1 | ನಿಲಯಪಾಲಕರು | 20000–36300 | 4 | 4 | – | 3 | – | 3 | 1 | – | 1 |
| 2 | ದ್ವಿ.ದ.ಸ (ಕಂಪ್ಯೂಟರ್ ಜ್ಞಾನ ಉಳ್ಳವರು) | 14550–26700 | 4 | 4 | – | 3 | – | 3 | 1 | – | 1 |
| | | | | **ಗ್ರೂಪ್–ಡಿ (ಶೇ. 85 ರ ಮೀಸಲಾತಿ)** | | | | | | | |
| 1 | ಅಡುಗೆಯವರು | 10400–16400 | 8 | 4 | 4 | 4 | 3 | 7 | – | 1 | 1 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 2 | ಅಡುಗೆ ಸಹಾಯಕರು/ ಗ್ರೂಪ್–ಡಿ | 9600–14550 | 16 | 16 | – | 14 | – | 14 | 2 | – | 2 |

**ಟಿಪ್ಪಣಿ :** ಏಕರೂಪ ವೇತನ ಶ್ರೇಣಿಯಲ್ಲಿನ, (1) ಭಾಷಾ ಹಾಗೂ ಐಚ್ಛಿಕ ವಿಷಯ ಉಪನ್ಯಾಸಕರ ಹುದ್ದೆಗಳು ಮತ್ತು (2) ಅಡುಗೆ ಸಹಾಯಕರು ಹಾಗೂ ಗ್ರೂಪ್–ಡಿ ಹುದ್ದೆಗಳನ್ನು ಸಂಯುಕ್ತಗೊಳಿಸಿದ್ದು, ಖಾಲಿ ಹುದ್ದೆಗಳು ಲಭ್ಯವಾಗುವ ಸಮಯದಲ್ಲಿ ಹುದ್ದೆಗಳನ್ನು ರೊಟೇಷನ್ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**(ಆ) ಮೊರಾರ್ಜಿ ದೇಸಾಯಿ/ಏಕಲವ್ಯ ಮಾದರಿ/ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳ ಹುದ್ದೆಗಳು**

| ಕ್ರಸ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | ಸ್ಥಳೀಯ ವೃಂದದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಮೀಸಲಿರಿಸಲಾದ ಹುದ್ದೆಗಳು | | | ಪ್ರಾದೇಶಿಕ ಸ್ಥಳೀಯವಲ್ಲದ ವೃಂದದ ಹುದ್ದೆಗಳು (ಉಳಿದ ಮೂಲ ವೃಂದ) | | |
|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ಒಟ್ಟು | ನೇರ ನೇಮಕಾತಿ | ಮುಂಬಡ್ತಿ | ಒಟ್ಟು |
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| | | | | | **ಗ್ರೂಪ್–ಬಿ (ಶೇ. 75ರ ಮೀಸಲಾತಿ)** | | | | | | |
| 1 | ಪ್ರಾಂಶುಪಾಲರು | 22800–43200 | 128 | 128 | – | 96 | – | 96 | 32 | – | 32 |
| | | | | | **ಗ್ರೂಪ್–ಸಿ (ಶೇ. 80ರ ಮೀಸಲಾತಿ)** | | | | | | |
| 1 | ಕನ್ನಡ ಶಿಕ್ಷಕರು/ ಇಂಗ್ಲೀಷ್ ಶಿಕ್ಷಕರು/ ಹಿಂದಿ ಶಿಕ್ಷಕರು/ ಗಣಿತ ಶಿಕ್ಷಕರು/ ವಿಜ್ಞಾನ ಶಿಕ್ಷಕರು/ ಸಮಾಜ ವಿಜ್ಞಾನ ಶಿಕ್ಷಕರು/ ದೈಹಿಕ ಶಿಕ್ಷಕರು/ ಸಂಗೀತ ಶಿಕ್ಷಕರು/ ಕಂಪ್ಯೂಟರ್ ಶಿಕ್ಷಕರು | 17650–32000 | 1152 | 1152 | – | 922 | – | 922 | 230 | – | 230 |
| 2 | ಕ್ರಾಫ್ಟ್ ಶಿಕ್ಷಕರು/ಸ್ಟಾಫ್ ನರ್ಸ್ | 16000–29600 | 256 | 256 | – | 205 | – | 205 | 51 | – | 51 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 3 | ಪ್ರ.ದ.ಸ (ಕಂಪ್ಯೂಟರ್ ಜ್ಞಾನ ಉಳ್ಳವರು)/ ನಿಲಯಪಾಲಕರು | 14550–26700 | 256 | 256 | – | 205 | – | 205 | 51 | – | 51 |
| ಗ್ರೂಪ್–ಡಿ (ಶೇ. 85ರ ಮೀಸಲಾತಿ) | | | | | | | | | | | |
| 1 | ಅಡುಗೆಯವರು | 10400–16400 | 384 | 192 | 192 | 164 | 163 | 327 | 28 | 29 | 57 |
| 2 | ಅಡುಗೆ ಸಹಾಯಕರು/ ಗ್ರೂಪ್–ಡಿ/ ಕಾವಲುಗಾರರು/ ಸ್ವಚ್ಛತಾ ಸಿಬ್ಬಂಧಿ | 9600–14550 | 1024 | 1024 | – | 871 | – | 871 | 153 | – | 153 |

ಟಿಪ್ಪಣಿ : ಏಕರೂಪ ವೇತನ ಶ್ರೇಣಿಯಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಹುದ್ದೆಗಳನ್ನು ಸಂಯುಕ್ತಗೊಳಿಸಿದ್ದು ಖಾಲಿ ಹುದ್ದೆಗಳು ಲಭ್ಯವಾಗುವ ಸಮಯದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಗುರುತಿಸಲಾದ ಹುದ್ದೆಗಳನ್ನು ರೊಟೇಷನ್ ಆಧಾರದ ಮೇಲೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**(ಇ) ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆಗಳು**

| ಕ್ರಸ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | ಸ್ಥಳೀಯ ವೃಂದದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಮೀಸಲಿರಿಸಲಾದ ಹುದ್ದೆಗಳು | | | ಪ್ರಾದೇಶಿಕ ಸ್ಥಳೀಯವಲ್ಲದ ವೃಂದದ ಹುದ್ದೆಗಳು (ಉಳಿದ ಮೂಲ ವೃಂದ) | | |
|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ಒಟ್ಟು | ನೇರ ನೇಮಕಾತಿ | ಮುಂಬಡ್ತಿ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| ಗ್ರೂಪ್–ಎ ಕಿರಿಯ ಶ್ರೇಣಿ (ಶೇ. 75ರ ಮೀಸಲಾತಿ) | | | | | | | | | | | |
| 1 | ಪ್ರಾಂಶುಪಾಲರು | 28100–50100 | 2 | 2 | – | 1 | – | 1 | 1 | – | 1 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| **ಗ್ರೂಪ್–ಬಿ (ಶೇ. 75ರ ಮೀಸಲಾತಿ)** | | | | | | | | | | | |
| 1 | ಉಪ ಪ್ರಾಂಶುಪಾಲರು | 22800–43200 | 9 | 9 | – | 7 | – | 7 | 2 | – | 2 |
| **ಗ್ರೂಪ್–ಸಿ (ಶೇ. 80ರ ಮೀಸಲಾತಿ)** | | | | | | | | | | | |
| 1 | ಸ್ನಾತಕೋತ್ತರ ಪದವಿಧರ ಭಾಷಾ ಶಿಕ್ಷಕರು/ ಸ್ನಾತಕೋತ್ತರ ಪದವಿಧರ ಐಚ್ಛಿಕ ವಿಷಯ ಶಿಕ್ಷಕರು/ದೈಹಿಕ ಶಿಕ್ಷಕರು/ ಕಛೇರಿ ಅಧೀಕ್ಷಕರು | 17650–32000 | 36 | 36 | – | 29 | – | 29 | 7 | – | 7 |
| 2 | ಸಂಗೀತ ಶಿಕ್ಷಕರು/ಕಲಾ ಶಿಕ್ಷಕರು/ಗ್ರಂಥಪಾಲಕರು/ ಶುಶ್ರೂಷಕರು/ಉಗ್ರಾಣ ನಿಯಂತ್ರಕರು | 16000–29600 | 10 | 10 | – | 8 | – | 8 | 2 | – | 2 |
| 3 | ಪ್ರ.ದ.ಸ./ಕ್ಯಾಟರಿಂಗ್ ಸುಪರ್‌ವೈಜರ್ | 14550–26700 | 4 | 4 | – | 3 | – | 3 | 1 | – | 1 |
| 4 | ಗಣಕಯಂತ್ರ ಸಹಾಯಕರು/ ಪ್ರಯೋಗಾಲಯ ಸಹಾಯಕರು | 11600–21000 | 6 | 6 | – | 5 | – | 5 | 1 | – | 1 |
| **ಗ್ರೂಪ್–ಡಿ (ಶೇ. 85ರ ಮೀಸಲಾತಿ)** | | | | | | | | | | | |
| 1 | ಮುಖ್ಯ ಅಡುಗೆಯವರು/ಅಡುಗೆ ಸಹಾಯಕರು/ ಗ್ರೂಪ್–ಡಿ/ಕಾವಲುಗಾರರು/ ವಿದ್ಯುತ್‌ಚ್ಛಕ್ತಿ ಮತ್ತು ಕೊಳಾಯಿ ದುರಸ್ಥಿದಾರರು | 9600–14550 | 38 | 38 | – | 33 | – | 33 | 5 | – | 5 |

**ಟಿಪ್ಪಣಿ :** ಏಕರೂಪ ವೇತನ ಶ್ರೇಣಿಯಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಹುದ್ದೆಗಳನ್ನು ಸಂಯುಕ್ತಗೊಳಿಸಿದ್ದು ಖಾಲಿ ಹುದ್ದೆಗಳು ಲಭ್ಯವಾಗುವ ಸಮಯದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಗುರುತಿಸಲಾದ ಹುದ್ದೆಗಳನ್ನು ರೊಟೇಷನ್ ಆಧಾರದ ಮೇಲೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 649**

**SC-500**

